# ಮಕ್ಕಳು ತಮ್ಮ ಶಾಲೆಯ ಸಂಸ್ಕೃತಿಯನ್ನೇ ಮೈಗೂಡಿಸಿಕೊಳ್ಳುತ್ತಾರೆ

ವಿಜಯಲಕ್ಷ್ಮೀ ಪಿ.ಎಸ್.

ಅನುಭವ

ನನ್ನ ಸಂಶೋಧನಾ ಅಧ್ಯಯನದ (Fellowship) ಅವಧಿಯಲ್ಲಿ ನಾನು ಕೆಲಸ ಮಾಡಿದ ಶಾಲೆಯೊಂದರಲ್ಲಿ ದೊರೆತ ಅನುಭವವಿದು.

ಕ್ಲಸ್ಟರ್ ಮಟ್ಟದ ಮೇಳವೊಂದಕ್ಕೆ ಯೋಜನೆಯನ್ನು ರೂಪಿಸಲಾಗುತ್ತಿತ್ತು. ಸಂಶೋಧನಾ ವಿದ್ಯಾರ್ಥಿಗಳಾಗಿದ್ದ ನಮಗೆ ಅನೇಕ ಶಾಲೆಗಳ ಜೊತೆಗೂಡಿ ಕೆಲಸ ಮಾಡಬೇಕಾಗಿತ್ತು. ಅಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಜೊತೆ ಗರಿಷ್ಠ ಸಮಯವನ್ನು ಕಳೆಯಬೇಕಿತ್ತು. ಶಿಕ್ಷಕರು ಮಕ್ಕಳೊಂದಿಗೆ ಅನೌಪಚಾರಿಕವಾಗಿ ವಿಚಾರ ವಿನಿಮಯ ನಡೆಸುವುದನ್ನು ಖಾತ್ರಿಪಡಿಸಿಕೊಳ್ಳಲು ನಾವು ಚಟುವಟಿಕೆಗಳು / ಆಟಗಳನ್ನು ನಡೆಸಿ, ಅವರನ್ನು ಪರೀಕ್ಷಿಸಿ ನೋಡಬೇಕಿತ್ತು. ಚಟುವಟಿಕೆಗಳ ಮೂಲಕ ವಿದ್ಯಾರ್ಥಿಗಳ ಜೊತೆ ವ್ಯವಹರಿಸಿದರೆ ಮತ್ತು ಸಂವಹನ ನಡೆಸಿದರೆ ಅದರಿಂದ ಕಲಿಕೆ–ಬೋಧನೆಯ ಚಟುವಟಿಕೆಯು ಹೆಚ್ಚು ಪರಿಣಾಮಕಾರಿಯಾಗುತ್ತದೆ ಎಂಬುದನ್ನು ಶಿಕ್ಷಕರು ಕಲಿಯಬೇಕಿತ್ತು. ಮೇಳ ಮುಗಿಯುವ ಹೊತ್ತಿಗೆ, ಸಂವಾದ ಮತ್ತು ಕಲಿಕೆಯ ಅನುಭವದ ಈ ಪ್ರಯಾಣವು ಶಿಕ್ಷಕರು ಹಾಗೂ ಕಲಿಯುವವರಿಗೆ ಒಂದು ನಿದರ್ಶನವನ್ನು ಒದಗಿಸುತ್ತದೆ ಎನ್ನುವ ಭರವಸೆ ನಮಗಿತ್ತು.

ಸಹೋದ್ಯೋಗಿಗಳ ನಡುವಿನ ಪೈಪೋಟಿಯನ್ನು 'ಕಾರ್ಯ–ಸ್ಥಳದಲ್ಲಿರುವ ಸ್ಪರ್ಧೆ' ಎಂದು ನೋಡುವುದು ಸಾಮಾನ್ಯ. ಇದರಿಂದಾಗಿಯೇ ಕೆಲವು ಗುಂಪುಗಳು ಹುಟ್ಟಿಕೊಳ್ಳುತ್ತವೆ ಹಾಗೂ ಲಘುವಾಗಿ ಒಂದಷ್ಟು ಗಾಳಿಸುದ್ದಿ ಮತ್ತು ತಮಾಷೆಗೂ ಕಾರಣವಾಗುತ್ತವೆ. ನಾನು ಸುಮಾರು ಎರಡು ದಿನಗಳ ಕಾಲ ಆ ಶಾಲೆಯಲ್ಲಿದ್ದೆ. ಈ ಸಂದರ್ಭದಲ್ಲಿ, ಶಿಕ್ಷಕರು ಮಧ್ಯಾಹ್ನದ ಊಟದ ವೇಳೆ ಎರಡು ಗುಂಪುಗಳಾಗಿ ತಮ್ಮ ಲಂಚ್ ಬಾಕ್ಸ್‌ಗಳನ್ನು ಹಿಡಿದುಕೊಂಡು ಎರಡು ಪ್ರತ್ಯೇಕ ಕೋಣೆಗಳಿಗೆ ಹೋಗುವುದನ್ನು ಗಮನಿಸಿದೆ. ಸಂಶೋಧನಾ ವಿದ್ಯಾರ್ಥಿಯಾದ ನನಗೆ, ಯಾವ ಗುಂಪಿನ ಜೊತೆ ಕುಳಿತುಕೊಳ್ಳಬೇಕು ಅಥವಾ ಪ್ರತ್ಯೇಕವಾಗಿ ಕುಳಿತುಕೊಳ್ಳಬೇಕೇ ಎನ್ನುವ ಗೊಂದಲ ಉಂಟಾಯಿತು. ಅಲ್ಲಿಯ ಮುಖ್ಯ ಶಿಕ್ಷಕಿ ನನ್ನ ಸಂದಿಗ್ಧತೆಯನ್ನು ಗಮನಿಸಿ ತಮ್ಮ ತಂಡದ ಜೊತೆ ಕುಳಿತುಕೊಳ್ಳಲು ನನ್ನನ್ನು ಆಹ್ವಾನಿಸಿದರು (ಈ ಗುಂಪನ್ನು 'ಹ್ಯಾರಿ' ಎಂದು ಕರೆಯೋಣ). ಆಹಾರ, ಸಂಸ್ಕೃತಿ ಮತ್ತು ಬೆಂಗಳೂರಿನ ಸಂಚಾರ ದಟ್ಟಣೆಯ ಕುರಿತು ನಮ್ಮ ನಡುವೆ ಉತ್ತಮ ಮಾತುಕತೆ ನಡೆಯಿತು.

ಕೆಲವು ದಿನಗಳು ಕಳೆದವು. ನಾನು ಎಲ್ಲಾ ಶಿಕ್ಷಕರ ಜೊತೆ ಉತ್ತಮ ಬಾಂಧವ್ಯವನ್ನು ಬೆಳೆಸುತ್ತಿದ್ದೆ. ಒಂದು ದಿನ ಇನ್ನೊಂದು ಗುಂಪಿನ (ಇದನ್ನು 'ಪಾಟರ್' ಎಂದು ಕರೆಯೋಣ) ಶಿಕ್ಷಕರು ನನ್ನನ್ನು ಕರೆದು ಅವರೊಂದಿಗೆ ಊಟ ಮಾಡಲು ಆಹ್ವಾನಿಸಿದರು. ನಾನು ಅವರ ಆಹ್ವಾನವನ್ನು ಅಕ್ಕರೆಯಿಂದಲೇ ಸ್ವೀಕರಿಸಿದೆ ಹಾಗೂ ಎರಡೂ ಗುಂಪುಗಳ ಜೊತೆ ಉತ್ತಮ ಬಾಂಧವ್ಯವನ್ನು ಕಾಪಾಡುತ್ತಲೇ ಕೆಲವು ದಿನಗಳ ಕಾಲ ಅವರೊಂದಿಗೆ ಮಧ್ಯಾಹ್ನದ ಊಟ ಮಾಡಿದೆ. 20 ದಿನಗಳ ಕಾಲ ಈ ಎರಡೂ ಗುಂಪುಗಳ ಜೊತೆಗೆ ನಾನು ಊಟ ಮಾಡಿದರೂ, ಈ ಎರಡು ಗುಂಪುಗಳಲ್ಲಿ ನಾನು ಯಾವುದೇ ಗಾಳಿಸುದ್ದಿ ಅಥವಾ ಚರ್ಚೆಯನ್ನಾಗಲೀ ಗಮನಿಸಲಿಲ್ಲ. ಉಳಿದ ಸಮಯದಲ್ಲಿ ಈ ಎರಡೂ ಗುಂಪುಗಳು ಪರಸ್ಪರ ಉತ್ತಮ ಬಾಂಧವ್ಯವನ್ನು ಹೊಂದಿದ್ದವು ಮಾತ್ರವಲ್ಲದೆ ಪಠ್ಯ ಯೋಜನೆ ಹಾಗೂ ಮಕ್ಕಳ ಕುರಿತ ಕಿರುಗತೆಗಳನ್ನು, ಖುಷಿಯನ್ನು ಪರಸ್ಪರ ಹಂಚಿಕೊಳ್ಳುತ್ತಿದ್ದರು ಎಂಬುದನ್ನು ನಾನು ಗಮನಿಸಿದೆ. ಕೊನೆಗೆ, ಒಂದು ಮಧ್ಯಾಹ್ನ ನಾನು ಹ್ಯಾರಿ ಗುಂಪಿನ ಜೊತೆ ಊಟ ಮಾಡುತ್ತಿದ್ದಾಗ, ಪ್ರಧಾನ ಬಾಣಸಿಗ ಮುಖ್ಯ ಶಿಕ್ಷಕಿಯನ್ನು ಭೇಟಿಯಾದರು. ಆ ದಿನ ತಯಾರಿಸಿದ ಸಾಂಬಾರು ಮತ್ತು ಬರ್ಫಿಯ ರುಚಿ ತುಂಬಾ ಚೆನ್ನಾಗಿದ್ದು, ಒಂದಷ್ಟು ರುಚಿ ನೋಡುವಂತೆ ಅವರು ಮುಖ್ಯ ಶಿಕ್ಷಕಿಯನ್ನು ಕೇಳಿಕೊಂಡರು. ಒಬ್ಬ ವಿದ್ಯಾರ್ಥಿಯ ಮೂಲಕ ಒಂದಷ್ಟು ಕಳುಹಿಸಿಕೊಡುವಂತೆ ಮುಖ್ಯ ಶಿಕ್ಷಕಿಯು ಮುಖ್ಯ ಬಾಣಸಿಗನಿಗೆ ತಿಳಿಸಿದರು. ಬಾಣಸಿಗ, ತಲೆಅಲ್ಲಾಡಿಸಿ ಹೊರಟು ಹೋದರು. ಕೆಲ ನಿಮಿಷಗಳ ನಂತರ, ಯಾವ ವಿದ್ಯಾರ್ಥಿಯು ಆಹಾರ ತೆಗೆದುಕೊಂಡು ಬರುತ್ತಿದ್ದಾನೆ ಎಂದು ಶಿಕ್ಷಕಿಯೊಬ್ಬರು ಬಾಗಿಲ ಬಳಿ ಕುಳಿತಿದ್ದ ಇನ್ನೊಬ್ಬ ಶಿಕ್ಷಕಿಯನ್ನು ಇದ್ದಕ್ಕಿದ್ದಂತೆ ಕೇಳಿದರು. ಮುಖ್ಯ ಬಾಣಸಿಗನು ಯಾರನ್ನಾದರೂ ಕಚೇರಿಯ ಒಳಗೆ ಕಳುಹಿಸಬಹುದು ಎಂದು ಗೊಣಗಿದರು. ಆ ವೇಳೆಗಾಗಲೇ ನಾನು ಅವರ ಆಡುಭಾಷೆಯನ್ನು ಅರ್ಥ ಮಾಡಿಕೊಂಡೆ ಹಾಗೂ ಶಿಕ್ಷಕರು 'ಯಾರನ್ನೋ' ಎಂದು ಯಾಕೆ ಹೇಳಿದರು ಎನ್ನುವುದನ್ನು ಗ್ರಹಿಸಿಕೊಂಡೆ. ಈ ನಡುವೆ, ಬಾಗಿಲ ಬಳಿ ಕುಳಿತಿದ್ದ ಶಿಕ್ಷಕಿಯು ತಕ್ಷಣವೇ ಎದ್ದು, ಯಾವ ವಿದ್ಯಾರ್ಥಿ ಆಹಾರವನ್ನು ತೆಗೆದುಕೊಂಡು ಬರುತ್ತಿದ್ದಾರೆ ಎಂಬುದನ್ನು ನೋಡಲು ಹೊರ ಹೋದರು. ಅವರು ತನ್ನ ಜೊತೆ ಹುಡುಗಿಯೊಂದನ್ನು ಕರೆದುಕೊಂಡು ಬಂದರು ಹಾಗೂ ಅವರೆಲ್ಲರಿಗೂ ಆ ಹುಡುಗಿಯೇ ಆಹಾರ ಬಡಿಸುವಂತೆ ನೋಡಿಕೊಂಡರು. ಎಲ್ಲರೂ ಊಟವನ್ನು ಸವಿದರು.

ಇಡೀ ಘಟನೆಯು ನನ್ನಲ್ಲಿ ಕುತೂಹಲವನ್ನು ಹುಟ್ಟುಹಾಕಿತು. ಸಂಜೆಯ ವೇಳೆ, ಎಲ್ಲಾ ಸಂಶೋಧನಾ ವಿದ್ಯಾರ್ಥಿಗಳು, ನಗರಕ್ಕೆ ಹಿಂದಿರುಗುವುದಕ್ಕಾಗಿ ಪಟ್ಟಣದ ಬಸ್ ನಿಲ್ದಾಣದಲ್ಲಿ ಭೇಟಿಯಾದೆವು. ಅವರಲ್ಲಿ ಸ್ಥಳೀಯರೂ ಆಗಿದ್ದ ಒಬ್ಬರಲ್ಲಿ, ಮಧ್ಯಾಹ್ನದ ಊಟದ ವೇಳೆ ನಡೆದ ಘಟನೆಯ ಕುರಿತು ಪ್ರಸ್ತಾಪಿಸಿ, 'ಯಾರನ್ನೋ' ಎಂದಾಗ, ಅದು ಜಾತಿಯ ಕುರಿತಾಗಿತ್ತೇ' ಎಂದು ನಾನು ಕೇಳಿದೆ. 'ಹೌದು, ಮೊದಲ ದಿನದಿಂದಲೇ ನೀನು ಅದನ್ನು ಗಮನಿಸಿಲ್ಲವೇ? ಇನ್ನು ಯಾವ ಕಾರಣಕ್ಕಾಗಿ ಶಿಕ್ಷಕರಲ್ಲಿ ಎರಡು ಗುಂಪುಗಳಿವೆ!' ಎಂದು ನನ್ನ ಸಹೋದ್ಯೋಗಿ ಉತ್ತರಿಸಿದರು. ನನಗೆ ದಂಗು ಬಡಿದಂತಾಯಿತು. ನಾನು ಎಲ್ಲ ಘಟನೆಗಳನ್ನೂ ಒಂದಕ್ಕೊಂದು ಜೋಡಿಸಿ ಅದರ ಅರ್ಥ ಹುಡುಕಲು ಪ್ರಯತ್ನಿಸಿದೆ. ಶಿಕ್ಷಕರು ಪ್ರತ್ಯೇಕವಾಗಿ ಗುಂಪು–ಗೂಡುವುದಕ್ಕೂ ಕಾರ್ಯಸ್ಥಳದ ಸ್ಪರ್ಧೆಗೂ ಯಾವುದೇ ಸಂಬಂಧವಿರಲಿಲ್ಲ. ಇದು ಜನರ ಎರಡು ವರ್ಗಗಳ ನಡುವೆ ಆಹಾರವನ್ನು ಹಂಚಿ ತಿನ್ನಲು ಇರುವ ನಿರ್ಬಂಧದ ಕುರಿತ ಸಾಮಾಜಿಕ ರೂಢಿಯನ್ನು ಆಧರಿಸಿದ ಎಲ್ಲೆಯ ಸ್ಪಷ್ಟ ಗುರುತಿಸುವಿಕೆಯಾಗಿತ್ತು. ನಮ್ಮ ಸಮಾಜ ಇರುವುದೇ ಹೀಗೆ ಮತ್ತು ಎಲ್ಲರೂ ಈ ಸಮಾಜದ ನಿಯಮಗಳನ್ನು ಅನುಸರಿಸಲೇ–

ಬೇಕಾದುದರಿಂದ ಶಿಕ್ಷಕರ ಕ್ರಮಗಳ ಕುರಿತು ತೀರ್ಪು ನೀಡುವುದು ನನ್ನಿಂದ ಸಾಧ್ಯವಾಗಲಿಲ್ಲ.

ಪೌರತ್ವದ ಕುರಿತು ನಮ್ಮ ನಡುವೆ ಹೆಚ್ಚು ಚರ್ಚೆಯಾಗುವುದಿಲ್ಲ. ನಾವಿದನ್ನು ನಮ್ಮ ಸಮಾಜವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಓದುತ್ತೇವೆ. ಬಹುಶಃ ನಾವು ಮಕ್ಕಳಾಗಿದ್ದಾಗ, ನಮ್ಮ ಪೋಷಕರು ತಮ್ಮ ಮತ ಚಲಾಯಿಸಿದ ನಂತರ ಅವರ ಉಗುರಿನ ಮೇಲೆ ಹಾಕುವ ಕಡುನೀಲಿ ಶಾಯಿಯ ಗುರುತನ್ನು ಕಂಡಾಗಲೇ ನಾಗರೀಕರ ಹಕ್ಕುಗಳ ಕುರಿತು ಮೊದಲ ಬಾರಿಗೆ ನಮಗೆ ಅರಿವಾಗಿದ್ದು. ಚುನಾವಣೆ ಹೊರತುಪಡಿಸಿ, ಬೇರೆ ಯಾವ ಸಂದರ್ಭದಲ್ಲಿ ನಾವು 'ಪೌರ' ಎಂಬ ಶಬ್ದವನ್ನು ಕೇಳಿದ್ದೇವೆ? ಪೌರತ್ವ ಎಂದರೇನು? ನಮ್ಮ ಸಮಾಜ ಹೇಗಿದೆಯೋ, ಹಾಗೆಯೇ ನಾವು ಇರುತ್ತೇವೆ. ನಾವು ಸಾಮಾಜಿಕ ನಿಯಮಗಳನ್ನು ಅನುಕರಿಸುತ್ತೇವೆ ಮತ್ತು ಅನುಸರಿಸುತ್ತೇವೆ– ಎಂಬಷ್ಟೇ ಇದು ತುಂಬಾ ಸರಳವಾದ ವಿಚಾರ. ನಮ್ಮ ಸಮೀಪದ ಸಮಾಜದಲ್ಲಿ, ನಾವು ಉತ್ತಮ ನಾಗರಿಕರು ಎಂಬುದನ್ನು ಸಾಬೀತುಪಡಿಸಬೇಕೇ ಹೊರತು, ಎಲ್ಲೋ ರಾಜಧಾನಿಯ ಮಹಾನಗರದಲ್ಲಿ ಅಥವಾ ನಮ್ಮ ದೇಶದ ಯಾವುದೋ ಗಡಿಯಲ್ಲಿ ಇದನ್ನು ಸಾಬೀತುಪಡಿಸುವ ಅಗತ್ಯವಿಲ್ಲ.

ಈ ಘಟನೆಯಲ್ಲಿ ಕಂಡುಬಂದಂತೆ, ಶಿಕ್ಷಕರು ಸಹ ಅವರು ಹುಟ್ಟಿ ಬೆಳೆದ ಸಮಾಜದ ಇಂಥ ನಿಯಮಗಳನ್ನು ಕೂಡ ಪಾಲಿಸುತ್ತಾರೆ. ಸಮಾಜವು ಇದೇ ರೀತಿ ವರ್ತಿಸುತ್ತದೆ ಹಾಗೂ ಈ ನಿಯಮಗಳನ್ನು ಅವರು ಪಾಲಿಸಬೇಕು ಎಂಬುದನ್ನು ಅವರು ಅರಿತುಕೊಂಡಿದ್ದಾರೆ. ಅದೇ ಶಾಲೆಯಲ್ಲಿ, ಬೆಳಗ್ಗಿನ ಸಭೆಯಲ್ಲಿ ಹಾಗೂ ಶಾಲಾ ದಿನದ ಅಂತ್ಯದಲ್ಲಿ – ಹೀಗೆ ಎರಡು ಬಾರಿ ರಾಷ್ಟ್ರಗೀತೆಯನ್ನು ಹಾಡಲಾಗುತ್ತದೆ. ಈ ವಿಚಾರದಲ್ಲಿ ತುಂಬಾ ನಿರ್ದಿಷ್ಟವಾಗಿದ್ದ ಮುಖ್ಯ ಶಿಕ್ಷಕಿಯು, ರಾಷ್ಟ್ರಗೀತೆ ಹಾಡದೆ ಯಾರೂ ಹೊರಗೆ ಹೋಗಬಾರದು ಎನ್ನುವ ಕಾರಣಕ್ಕೆ ಶಾಲೆಯ ಗೇಟುಗಳಿಗೆ ಬೀಗ ಹಾಕಿಸಿ ಬಿಡುತ್ತಿದ್ದರು. ಪೌರತ್ವವನ್ನು ವಿದ್ಯಾರ್ಥಿಗಳಲ್ಲಿ ಅಚ್ಚೊತ್ತುವುದೇ ಎರಡು ಬಾರಿ ರಾಷ್ಟ್ರಗೀತೆಯನ್ನು ಹಾಡಿಸುವುದರ ಮೂಲ ಉದ್ದೇಶವಾಗಿತ್ತು. ತಮಗೆ ಕಲಿಸಿದ್ದೆಲ್ಲವನ್ನು ವಿದ್ಯಾರ್ಥಿಗಳು ಕಲಿಯಲಾರರು. ಆದರೆ, ಶಿಕ್ಷಕರ ಕ್ರಮಗಳು ಮತ್ತು ವರ್ತನೆಗಳನ್ನು ಇವರು ಖಂಡಿತವಾಗಿಯೂ ಅನುಸರಿಸುತ್ತಾರೆ. ತಿಳಿದೋ, ತಿಳಿಯದೆಯೋ, ಅವರು ತಮ್ಮ ಶಾಲೆಯ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುತ್ತಾರೆ.

---



**ವಿಜಯಶ್ರೀ ಪಿ.ಎಸ್**. ಅವರು ಸಂಪನ್ಮೂಲ ವ್ಯಕ್ತಿಯಾಗಿದ್ದು, ಕಲಬುರ್ಗಿ ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಪ್ರತಿಷ್ಠಾನ ಇದರೊಂದಿಗೆ ಗುರುತಿಸಿಕೊಂಡಿದ್ದಾರೆ. ಇವರನ್ನು vijayashree.ps@azimpremjifoundation.org ಮೂಲಕ ಸಂಪರ್ಕಿಸಬಹುದು.

**ವಿಜ್ಞಾನದ ಶಿಕ್ಷಕಿಯು ತರಗತಿ ಕೋಣೆಯಲ್ಲಿ ಕೆಲವು ಮೂಲಭೂತ ಪ್ರಜಾತಾಂತ್ರಿಕ ಅಭ್ಯಾಸಗಳನ್ನು ಹೇಗೆ ಅಚ್ಚೊತ್ತಬಹುದು ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅವರಿಗೆ ಖಂಡಿತವಾಗಿಯೂ ಇದು ನೆರವಾಗುತ್ತದೆ. ಉದಾಹರಣೆಗೆ, ಪರಿಸರದಲ್ಲಿ ಒದಗಿಸುವ ಸಾಮಾನ್ಯ ಸಂಪನ್ಮೂಲಗಳ ಬಳಕೆ. ಇದು, ಮುಖ್ಯವಾಗಿ, ಪ್ರಯೋಗಾಲಯದಲ್ಲಿ ಅವಕಾಶವು ಎಲ್ಲರಿಗೂ ಸಮಾನ ಎಂದು ಅರಿತಿರುವುದರಿಂದ, ಪ್ರಯೋಗಾಲಯದಲ್ಲಿ ಕಾರ್ಯನಿರ್ವಹಿಸುವ ವೇಳೆ, ವಿಜ್ಞಾನದ ಪ್ರಮುಖ ಗುಣಲಕ್ಷಣವೆನಿಸಲಿದೆ.**

**–ಚಂದ್ರಿಕಾ ಮುರಳೀಧರನ್, ಡೆಮಾಕ್ರಸಿ ಇನ್ ದ ಸೈನ್ಸ್ ಕ್ಲಾಸ್‌ರೂ, ಪು 30**